# ದೈಹಿಕ ಶಿಕ್ಷಣದ ಗುರಿಗಳು

ಅದಿತಿ ಮುತಾತ್ಕರ್ ಮತ್ತು ಆಕಾಶ್ ಲುಗುನ್

ದೈಹಿಕ ಶಿಕ್ಷಣವು ಯಾವಾಗಲೂ ಸಹ ನಿರ್ವಹಿಸಲು ಒಂದು ಸವಾಲಿನ ವಿಷಯವೇ. ಬಹುತೇಕ ಉನ್ನತ ಪ್ರೌಢಶಾಲೆಗಳಲ್ಲಿ ಅದು ಶಾಲೆಯ ಪಠ್ಯಕ್ರಮದಲ್ಲಿ ಇದ್ದು, ದೈಹಿಕ ಶಿಕ್ಷಣಕ್ಕಾಗಿ ಒಬ್ಬ ಶಿಕ್ಷಕರು ಇದ್ದರೂ ಸಹ ಬಹುತೇಕವಾಗಿ ಅವರ ಕರ್ತವ್ಯವು, ಮಕ್ಕಳ ತಲೆ ಕೂದಲು, ಕೈನಲ್ಲಿನ ಉಗುರುಗಳು ಇವೆಲ್ಲ ಸರಿಯಾಗಿದೆಯೇ ಎಂದು ಪರೀಕ್ಷಿಸುವುದು ಅಥವಾ ಶಿಸ್ತನ್ನು, ಇಲ್ಲವೇ ವೈಯಕ್ತಿಕ ಶುಚಿತ್ವದ ಮಾನದಂಡಗಳನ್ನು ಸರಿಯಾಗಿ ಅನುಸರಿಸಿಲ್ಲ ಎಂಬ ಕಾರಣಕ್ಕಾಗಿ ವಿದ್ಯಾರ್ಥಿಗಳಿಗೆ ಶಿಕ್ಷೆ ನೀಡುವುದಕ್ಕೆ ಸೀಮಿತವಾಗಿರುತ್ತದೆ. ಈ ಶಿಕ್ಷಕರು ರಾಷ್ಟ್ರೀಯ ಹಬ್ಬಗಳ ಸಂಭ್ರಮಾಚರಣೆಯಲ್ಲಿ ಮುಂಚೂಣಿಯಲ್ಲಿ ಇರಬೇಕಾಗುತ್ತದೆ. ಬೇರೆ ವಿಷಯಗಳಿಗೆ ಇರುವಂತೆ ಇದಕ್ಕೆ ಮೌಲ್ಯಮಾಪನಗಳಿರುವುದಿಲ್ಲ. ಅನೇಕ ಬಾರಿ ಶಾಲೆಯೊಂದರ ಬೋಧನೆ ಮತ್ತು ಕಲಿಕೆಯ ಆಚರಣೆಗಳಲ್ಲಿ ದೈಹಿಕ ಶಿಕ್ಷಣದ ಕೊಡುಗೆ ಏನೆಂಬುದನ್ನು ಗುರುತಿಸುವುದು ಕಷ್ಟವಾಗುತ್ತದೆ.

ಆರ್ಟ್ ಆಫ್ ಪ್ಲೇ (ಕ್ರೀಡೆಯ ಕಲೆ) ಎಂಬ ಸಂಘಟನೆಯಾಗಿ ನಮ್ಮ ಗುರಿ ಏನೆಂದರೆ ಶಾಲೆಗಳಲ್ಲಿನ ಬೋಧನೆ ಮತ್ತು ಕಲಿಕೆಯ ಆಚರಣೆಯಲ್ಲಿ ದೈಹಿಕ ಶಿಕ್ಷಣದ ಕೊಡುಗೆಯನ್ನು ಹೆಚ್ಚಿಸುವುದು. ಶಿಕ್ಷಕರು, ಶಿಕ್ಷಕ ತರಬೇತುದಾರರು, ಶಿಕ್ಷಣದ ಅಧಿಕಾರಿಗಳು ಮತ್ತು ಪಠ್ಯಕ್ರಮದ ಶೈಕ್ಷಣಿಕ ಅಂಗಗಳು ಇವರೆಲ್ಲರ ಕಲಿಕೆಯ ಪ್ರಕ್ರಿಯೆಯಲ್ಲಿ ದೈಹಿಕ ಶಿಕ್ಷಣವನ್ನು ಕುರಿತ ತಿಳಿವಳಿಕೆಯನ್ನು ಅಭಿವೃದ್ಧಿಪಡಿಸಲು ನಾವು ದೆಹಲಿ ಮತ್ತು ಹರಿಯಾಣದ 8 ಸರ್ಕಾರಿ ಶಾಲೆಗಳಲ್ಲಿ ಕೆಲಸ ಮಾಡುತ್ತಿದ್ದೇವೆ . ಈ ಲೇಖನದಲ್ಲಿ ನಾವು ಶಿಕ್ಷಣದ ವಿಶಾಲ ಧ್ಯೇಯಕ್ಕೆ ದೈಹಿಕ ಶಿಕ್ಷಣದ ಕೊಡುಗೆ ಏನೆಂಬುದನ್ನು ಅನ್ವೇಷಿಸೋಣ.

## ಸರ್ಕಾರಿ ಶಾಲೆಗಳಲ್ಲಿನ ದೈಹಿಕ ಶಿಕ್ಷಣದ ಪ್ರಸಕ್ತ ಪರಿಸ್ಥಿತಿ

ಯುವಜನ ಸೇವೆ ಮತ್ತು ಕ್ರೀಡಾ ಸಚಿವಾಲಯದ ಪ್ರಕಾರ 2015ರಲ್ಲಿ ಭಾರತದ ತರುಣರಲ್ಲಿ ಶೇಕಡ 93.7 ಜನರಿಗೆ ಸಂಘಟಿತ ಕ್ರೀಡೆಗಳಿಗೆ ಯಾವುದೇ ಅವಕಾಶವಿರಲಿಲ್ಲ. 2005 ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು, ದೈಹಿಕ ಶಿಕ್ಷಣವು ಪಠ್ಯಕ್ರಮದ ಅತ್ಯಗತ್ಯ ಭಾಗ ಎಂದು ಶಿಫಾರಸ್ಸು ಮಾಡಿದ್ದರೂ ಮತ್ತು ಭಾರತದಲ್ಲಿನ ಎಲ್ಲ ನಿಗಮಗಳು ಸಹ ಈ ವಿಷಯವನ್ನು ಕಡ್ಡಾಯ ಎಂದು ಮಾಡಿದ್ದರೂ ಸಹ, ಈ ವಿಷಯಕ್ಕಾಗಲೀ ಅಥವಾ ದೈಹಿಕ ಶಿಕ್ಷಣದ ಶಿಕ್ಷಕರಿಗಾಗಲೀ, ವಿಜ್ಞಾನ ಮತ್ತು ಗಣಿತಕ್ಕೆ ಅಥವಾ ಈ ವಿಷಯಗಳನ್ನು ಕಲಿಸುವ ಅಧ್ಯಾಪಕರಿಗೆ ಸಿಕ್ಕಿರುವಂತಹ ಪ್ರಾಮುಖ್ಯ ಮತ್ತು ಗೌರವಗಳು ಸಿಗುತ್ತಿಲ್ಲ.

## ಶಾಲೆಯ ಶ್ರೇಣೀಕರಣದಲ್ಲಿ ದೈಹಿಕ ಶಿಕ್ಷಣದ ಸ್ಥಾನಮಾನ

ಬಹುತೇಕ ವಿಷಯ ಶಿಕ್ಷಕರುಗಳಿಗೆ ದೈಹಿಕ ಶಿಕ್ಷಣದ ಬಗ್ಗೆ ಇರುವುದು ಒಂದು ಏಕ ಆಯಾಮದ ದೃಷ್ಟಿಕೋನ. ಬಹುತೇಕ ಬಾರಿ ದೈಹಿಕ ಶಿಕ್ಷಣದ ಶಿಕ್ಷಕರಿಗೆ ಶಾಲೆಯ ವೇಳಾಪಟ್ಟಿಯನ್ನು ತಯಾರಿಸುವಾಗ ಅವರ ಆಶಯಕ್ಕನುಗುಣವಾಗಿ ನಿಗದಿತ ಕಾಲ ಸಿಗುವುದಿಲ್ಲ. ಶಿಕ್ಷಕರು ಮತ್ತು ಅಧಿಕಾರಿಗಳ ಜೊತೆ ಮಾತನಾಡಿದಾಗ ನಮಗೆ ತಿಳಿದುಬಂದಿರುವುದೇನೆಂದರೆ, ದೈಹಿಕ ಶಿಕ್ಷಣವು ಬಹುತೇಕ ಬಾರಿ ಚೆನ್ನಾಗಿ ರೂಪಿಸಲ್ಪಟ್ಟ ಗುರಿಗಳಿಲ್ಲದೆ ಹಾನಿಗೊಳಗಾಗುತ್ತದೆ.

ದೈಹಿಕ ಶಿಕ್ಷಣದ ಸಿದ್ಧಾಂತವನ್ನು ಮನಸೋ ಇಚ್ಛೆ ರೂಪಿಸಿಕೊಳ್ಳಲಾಗಿದೆ ಮತ್ತು ಬಹಳಷ್ಟು ಕಾಲದಿಂದಲೂ ಇದು ಶಿಕ್ಷಣ ತಜ್ಞರ ನಡುವೆ ಚರ್ಚೆಗೆ ಒಳಗಾಗಿದೆ. ಆದರೆ ಆರ್ಟ್ ಆಫ್ ಪ್ಲೇ ಸಂಘಟನೆಗೆ ಸೇರಿದ ನಾವು ನಂಬಿರುವುದೇನೆಂದರೆ ಯಾವುದೇ ಒಬ್ಬ ವ್ಯಕ್ತಿಯ ದೇಹವನ್ನು ಕುರಿತ ತಿಳಿವಳಿಕೆಯ ಕಲ್ಪನೆಯ ಸುತ್ತಲೂ ದೈಹಿಕ ಶಿಕ್ಷಣವನ್ನು ರೂಪಿಸಲಾಗಿದೆ. ದೇಹ, ಮನಸ್ಸು ಮತ್ತು ಪ್ರವೃತ್ತಿಗಳ ನಡುವಿನ ಸಂಬಂಧವು ನಮ್ಮ ಪಠ್ಯಕ್ರಮದ ಕೇಂದ್ರಬಿಂದುವಾಗಿದ್ದು, ಇದು ಪ್ರತಿಯೊಬ್ಬ ವ್ಯಕ್ತಿಯೂ ಕಲಿಯಲು ತನ್ನದೇ ವೇಗವನ್ನು ಅನುಸರಿಸಲು ಅವಕಾಶ ಮಾಡಿಕೊಡಬೇಕು ಮತ್ತು ತನ್ಮೂಲಕ ಸಹಜವಾಗಿಯೇ ದೈಹಿಕ ಶಿಕ್ಷಣವು ಅಭಿವ್ಯಕ್ತಿಯ ಮಾಧ್ಯಮವಾಗುತ್ತದೆ.

ಇನ್ನೊಂದು ಕಡೆಯಲ್ಲಿ ಸಾಂಪ್ರದಾಯಿಕ ದೃಷ್ಟಿಕೋನವೊಂದು ದೈಹಿಕ ಶಿಕ್ಷಣವನ್ನು, ಕೇವಲ ಹೆಮ್ಮೆ, ದೃಢಸಂಕಲ್ಪ, ಧೈರ್ಯ, ಶಾರೀರಕ ಗುಣಗಳನ್ನು ಬಲಪಡಿಸುವುದು ಮುಂತಾದ ಪರಂಪರಾಗತ ಮೌಲ್ಯಗಳಿಗೆ ಸೀಮಿತಗೊಳಿಸುತ್ತದೆ. ಕೆಲವೊಂದು ಸರ್ಕಾರಿ ಶಾಲೆಗಳಲ್ಲಿ ಅನೇಕ ಬಾರಿ ಶಿಕ್ಷಕರು ಮತ್ತು ಬೋಧಕರು ಈ ಎರಡು ಪರಿಕಲ್ಪನೆಗಳ ನಡುವೆ ಸಿಕ್ಕಿಕೊಳ್ಳುತ್ತಾರೆ. ಅವರು ತಾತ್ತ್ವಿಕವಾಗಿ ದೈಹಿಕ ಶಿಕ್ಷಣವು ಎಲ್ಲ ವಿದ್ಯಾರ್ಥಿಗಳಿಗೂ ಅಗತ್ಯ ಎಂದು ನಂಬಿದ್ದರೂ ಸಹ, ವಾಸ್ತವದಲ್ಲಿ ಕ್ರೀಡೆಯಲ್ಲಿ ಉತ್ಕೃಷ್ಟತೆಯ ಸಾಧನೆಗೆ ಮಾತ್ರ ಒತ್ತು ಕೊಡುತ್ತಾರೆ. ಇದೇ ಕಾರಣದಿಂದಲೇ ನಾವು ಅನೇಕ ಬಾರಿ ಗುರಿಯನ್ನು ಸಾಧಿಸುವಲ್ಲಿ ವಿಫಲರಾಗುತ್ತೇವೆ.

### ಹಂತ ನಿರ್ದಿಷ್ಟ ಪಠ್ಯಕ್ರಮ

ಅಂಬಾಲಾ, ಫರೀದಾಬಾದ್, ದೆಹಲಿಗಳಲ್ಲಿನ ಶಾಲೆಗಳಲ್ಲಿ ಕೆಲಸ ಮಾಡುತ್ತಿರುವ ನಮ್ಮ ಅನುಭವದಿಂದ ನಾವು ಕಂಡುಕೊಂಡಿರುವುದೇನೆಂದರೆ ನಮ್ಮ ಶಾಲೆಗಳಲ್ಲಿ ಈ ವಿಷಯವು ಪ್ರಸ್ತುತವಾಗಿ ಹೊಂದಿರುವ ಸ್ಥಾನಮಾನವನ್ನು ವಿವರಿಸುವಲ್ಲಿ ಕೆಲವು ನಿರ್ದಿಷ್ಟ ಮಾದರಿಗಳು ಹೊರಹೊಮ್ಮುತ್ತವೆ. ಯಾವುದೇ ಒಂದು ಮಗುವು ತನ್ನ ವಯಸ್ಸಿಗೆ ಅನುಗುಣವಾಗಿ ಕಲಿಯಬೇಕಾದ ಆವಶ್ಯಕತೆ ಇರುವ ದೈಹಿಕ ಮತ್ತು ಜೀವನ ಕೌಶಲ್ಯಗಳನ್ನು ಎತ್ತಿ ಹಿಡಿಯುವಂತಹ ಹಂತ ನಿರ್ದಿಷ್ಟ ಪಠ್ಯಕ್ರಮವೊಂದು ದೈಹಿಕ ಶಿಕ್ಷಣದ ಶಿಕ್ಷಕರಿಗೆ ಸಿಗುತ್ತಿಲ್ಲ.

### ದೈಹಿಕ ಶಿಕ್ಷಣದಲ್ಲಿ ಶಿಕ್ಷಕರಿಗೆ ತರಬೇತಿಯ ಕೊರತೆ

ತಮ್ಮ ಜ್ಞಾನವನ್ನು ಮೇಲ್ದರ್ಜೆಗೇರಿಸಿಕೊಳ್ಳಲು ಕಳೆದ 12 ವರ್ಷಗಳಲ್ಲಿ ಹರಿಯಾಣದ ದೈಹಿಕ ಶಿಕ್ಷಣದ ಶಿಕ್ಷಕರಿಗೆ ಯಾವುದೇ ಶಿಕ್ಷಕ ತರಬೇತಿ ಕಾರ್ಯಕ್ರಮವಾಗಲಿ ಅಥವಾ ವಾರಿಗೆಯವರಿಂದ ಕಲಿಯುವ ಅವಕಾಶವಾಗಲೀ ಸಿಕ್ಕಿಲ್ಲ.

### ದೈಹಿಕ ಶಿಕ್ಷಣದ ಗುರಿಗಳು ಏನು?

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005ರ ಪ್ರಕಾರ ಶಿಕ್ಷಣದ ಗುರಿಗಳು ಕೆಳಕಂಡಂತಿವೆ: 'ಜನತಂತ್ರ, ಸಮಾನತೆಯ ಮೌಲ್ಯಗಳು, ನ್ಯಾಯ, ಸ್ವಾತಂತ್ರ್ಯ, ಇತರರ ಒಳಿತಿನ ಬಗ್ಗೆ ಕಾಳಜಿ, ಧರ್ಮ ನಿರಪೇಕ್ಷತೆ, ಮಾನವ ಘನತೆ ಮತ್ತು ಹಕ್ಕುಗಳನ್ನು ಕುರಿತು ಗೌರವ ಈ ಪರಿಕಲ್ಪನೆಗಳ ಬಗ್ಗೆ ಬದ್ಧತೆ; ಚಿಂತನೆ ಮತ್ತು ಕ್ರಿಯೆಯಲ್ಲಿನ ಸ್ವಾತಂತ್ರ್ಯಗಳಿಂದ ಉಂಟಾದ ಚೆನ್ನಾಗಿ ಪರಿಗಣಿಸಿದ ಮತ್ತು ಮೌಲ್ಯ ಆಧಾರಿತವಾದ ವೈಯಕ್ತಿಕವಾಗಿಯೂ ಮತ್ತು ಸಾಮೂಹಿಕವಾಗಿಯೂ ನಿರ್ಣಯ ಮಾಡುವ ಶಕ್ತಿ; ಬೇರೆಯವರ ಕ್ಷೇಮಾಭಿವೃದ್ಧಿಯ ಬಗ್ಗೆ ಸೂಕ್ಷ್ಮಜ್ಞತೆ ಮತ್ತು ಭಾವುಕತೆ; ಕಲಿಕೆಯನ್ನು ಕಲಿಯುವುದು ಮತ್ತು ಕಲಿತದ್ದನ್ನು ಕೈಬಿಟ್ಟು ಮತ್ತೆ ಕಲಿಯುವುದು.'(ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005 ).

ಮುಂದಿನ ಕೆಲವು ಪ್ಯಾರಾಗಳಲ್ಲಿ ನಾವು ದೈಹಿಕ ಶಿಕ್ಷಣದ ಮೂಲಕ ಈ ಮೌಲ್ಯಗಳನ್ನು ಕಲಿಯುವಲ್ಲಿನ ನಮ್ಮ ಅನುಭವಗಳನ್ನು ಹಂಚಿಕೊಳ್ಳುತ್ತೇವೆ.

### ಕ್ರಿಯೆಯ ಮೂಲಕ ಕಲಿತದ್ದನ್ನು ಕೈಬಿಡುವುದು ಮತ್ತು ಪುನಃ ಕಲಿಯುವುದು ಇವುಗಳನ್ನು ಕಲಿಯುವುದು

ಕ್ರೀಡೆಯಲ್ಲಿ ವಾಸ್ತವದಲ್ಲಿ ಅಭ್ಯಾಸ ಮಾಡದೆ ಬಹುತೇಕವಾಗಿ ಯಾವುದೇ ಕೌಶಲ್ಯವನ್ನು ಸಹ ಕಲಿಯಲು ಸಾಧ್ಯವಿಲ್ಲ. ಸಕ್ರಿಯ ಭಾಗವಹಿಸುವಿಕೆ ಎಂಬುದು ಮಾನಸಿಕವೂ ಹಾಗೂ ದೈಹಿಕವೂ ಆದಂಥ ಕಾರ್ಯ ಎಂಬುದನ್ನು ಇಲ್ಲಿ ಗಮನಿಸುವುದು ಅತ್ಯಗತ್ಯ. ನೀವು ಫುಟ್ಬಾಲ್ ಆಟವನ್ನು ಕಲಿಯಬೇಕೆಂದರೆ, ಅದನ್ನು ಕೇವಲ ನೋಡುತ್ತಿದ್ದರೆ ಸಾಲದು ಅಥವಾ ಫುಟ್ಬಾಲ್ ಕೈಪಿಡಿಯನ್ನು ಓದುವುದು ಮಾತ್ರ ಸಾಲದು. ನೀವು ಮೈದಾನಕ್ಕಿಳಿಯಬೇಕು, ನೀವು ನಿಮ್ಮ ಮನಸ್ಸನ್ನು ತೊಡಗಿಸಿ ಪ್ರತಿದಿನ ಚೆಂಡನ್ನು ಒದೆಯುವ ಕೌಶಲ್ಯವನ್ನು ಅಭ್ಯಾಸ ಮಾಡಬೇಕು. ನಮ್ಮ ತರಗತಿಗಳಲ್ಲಿ ವಿದ್ಯಾರ್ಥಿಗಳು ನೇರವಾದ ಕೆಲಸದ ಮೂಲಕ ಮತ್ತು ತಮ್ಮದೇ ವೇಗದಲ್ಲಿ ತಮ್ಮದೇ ಆದ ಅನನ್ಯ ಅನುಭವಗಳನ್ನು ಗಳಿಸಿಕೊಳ್ಳುವುದರ ಮೂಲಕ ತಮ್ಮ ಕೌಶಲ್ಯಗಳನ್ನು ಮತ್ತು ಜ್ಞಾನವನ್ನು ನಿರ್ಮಿಸಿಕೊಳ್ಳುತ್ತಾರೆ.

ನವದೆಹಲಿಯಲ್ಲಿರುವ ನಮ್ಮ ಒಂದು ಶಾಲೆಯಲ್ಲಿನ ಮೂರನೇ ತರಗತಿಯ ವಿದ್ಯಾರ್ಥಿಯಾದ ಸಾಹಿಲ್ ಕಣ್ಣಾ ಮುಚ್ಚಾಲೆ ಆಟವನ್ನು ಆಡಲು ಆಡಲು ಇಷ್ಟಪಡುತ್ತಾನೆ. ಈ ಆಟದಲ್ಲಿ ತ್ರಿಕೋನದ ಆಕೃತಿಯಲ್ಲಿ ಇಡಲಾದ ಮೂರು ಕಂಬಗಳ ಮೇಲೆ ಆರು ಗುಮ್ಮಟಗಳನ್ನು ಕೂಡಿಸುವುದೇ ಗುರಿಯಾಗಿರುತ್ತದೆ. ಪ್ರತಿಯೊಂದು ಕಂಬದ ಮೇಲೂ ಮೂರು ನಿಮಿಷದಲ್ಲಿ ಎರಡು ಗುಮ್ಮಟಗಳನ್ನು ಕೂಡಿಸಬೇಕು. ಈ ಆಟದಲ್ಲಿರುವ ಒಂದೇ ಒಂದು ನಿಬಂಧನೆಯೆಂದರೆ ಒಂದು ತಂಡದ ಸದಸ್ಯನೊಬ್ಬನ ಕಣ್ಣುಗಳನ್ನು ಕಟ್ಟಲಾಗಿದ್ದು, ಉಳಿದ ಮೂವರು ಸದಸ್ಯರು ಆತನಿಗೆ ಸರಿಯಾದ ಸೂಚನೆಗಳನ್ನು ನೀಡಿ ಕಾಲಾವಧಿಯ ಒಳಗೆ ಗುರಿಯನ್ನು ಸಾಧಿಸಲು ನೆರವಾಗಬೇಕು.

ಒಮ್ಮೆ ನಮ್ಮ ಕಣ್ಣಾ ಮುಚ್ಚಾಲೆ ಕಾರ್ಯಕ್ರಮದಲ್ಲಿ ಈ ಆಟವನ್ನು ಮೂರು ಬಾರಿ ಆಡಿದೆವು. ಮೂರು ಬಾರಿಯೂ ತಾನೇ ಕಣ್ಣಿಗೆ ಪಟ್ಟಿ ಕಟ್ಟಿಕೊಳ್ಳುವವನು ಆಗುತ್ತೇನೆಂದು ಸಾಹಿಲ್ ಆಯ್ಕೆ ಮಾಡಿಕೊಂಡನು ಮತ್ತು ಪ್ರತಿಬಾರಿಯೂ ಅವನು ಎರಡು ನಿಮಿಷಗಳ ಒಳಗೆ ತನ್ನ ತಂಡವನ್ನು ಜಯದತ್ತ ಕೊಂಡೊಯ್ದನು.

ಆಟದ ಅವಧಿಯ ಅನಂತರ ನಾನು ಎಲ್ಲ ಕ್ರೀಡಾ ಸಾಮಗ್ರಿಗಳನ್ನು ಸಂಗ್ರಹಿಸುತ್ತಿದ್ದಾಗ, ಸಾಹಿಲ್, ಅವನ ತರಗತಿಯವರೆಲ್ಲರೂ ಅಷ್ಟು ಹೊತ್ತಿಗೆ ಹೋಗಿಬಿಟ್ಟಿದ್ದರೂ ಸಹ, ನಾನು ಕೆಲಸ ಮುಗಿಸಲೆಂದು ಕಾಯುತ್ತಿದ್ದನು. ಅವನು ನನ್ನತ್ತ ಬಂದು ಹೀಗೆಂದ, "ಅಕ್ಕ ನಾನಿವತ್ತು ಮೋಸ ಮಾಡುತ್ತಿದ್ದೆ, ನನಗೆ ಕೆಳಗಿನಿಂದ ಎಲ್ಲವೂ ಕಾಣಿಸುತ್ತಿತ್ತು. ನಾನು ಮೂರು ಬಾರಿ ಗೆದ್ದರೂ ಸಹ ನನಗೆ ಖುಷಿಯಾಗಲಿಲ್ಲ. ಗೆದ್ದದ್ದು ಸಹ ಒಳ್ಳೆಯದೆನಿಸಲಿಲ್ಲ. ನಾನು ಮೋಸ ಮಾಡದೆ ಗೆದ್ದಿದ್ದರೆ ನನಗೆ ಆಟದಲ್ಲಿ ಬಹಳಷ್ಟು ಆನಂದವಾಗುತ್ತಿತ್ತು."

ಸುಮಾರು 45 ನಿಮಿಷಗಳ ಕಾಲಾವಧಿಯಲ್ಲಿ ಸಾಹಿಲ್ ನು ತಾನು ಮೋಸ ಮಾಡಿದಲ್ಲಿ ಸುಲಭವಾಗಿ ಗೆದ್ದು ಬಹುಮಾನವನ್ನು ಪಡೆಯಬಹುದು ಎಂಬುದನ್ನು ಮೊದಲಿಗೆ ಕಲಿತುಕೊಂಡನು. ಆದರೆ ಆಟ ಮುಗಿಯುವ ವೇಳೆಗೆ ಅವನು ಈ ಮೊದಲನೆಯ ಪಾಠವನ್ನು ಕೈಬಿಟ್ಟನು ಮತ್ತು ಮೋಸವು ಆನಂದವನ್ನು ನಿಜಕ್ಕೂ ಕಡಮೆ ಮಾಡುತ್ತದೆ ಮತ್ತು ಪ್ರಾಮಾಣಿಕವಾಗಿ ಗೆದ್ದಾಗ ಒಳಿತೆನಿಸುವಷ್ಟು ಈ ಮಾರ್ಗದಲ್ಲಿ ಗೆದ್ದಾಗ ಅನಿಸುವುದಿಲ್ಲ ಎಂಬುದನ್ನು ಮತ್ತೆ ಕಲಿತುಕೊಂಡನು.

## ವಾರಿಗೆಯವರಿಂದ ಕಲಿಯುವುದು

ಮತ್ತೊಂದು ಮುಖ್ಯವಾದ ಪಾಠವೆಂದರೆ ಸ್ವತಂತ್ರ ಚಿಂತನೆ ಮತ್ತು ಇತರರನ್ನು ಕುರಿತು ಸೂಕ್ಷ್ಮವಾದ ಭಾವನೆಯನ್ನು ವಾರಿಗೆಯವರಿಂದ ಕಲಿಯುವುದು.

ಬಹಳಷ್ಟು ಜನ ವಿದ್ಯಾರ್ಥಿಗಳು ಒಂದು ಪರಿಕಲ್ಪನೆಯನ್ನು ಕುರಿತು ತಮ್ಮ ಶಿಕ್ಷಕರಿಂದ ವಿವರಣೆಯನ್ನು ಒಂದು ಬಾರಿ ಯಾವುದೇ ಹಿಂಜರಿಕೆ ಇಲ್ಲದೆ ಕೇಳುತ್ತಾರೆ ಆದರೆ ಎರಡನೆಯ ಬಾರಿ ಅದೇ ಪ್ರಶ್ನೆಯನ್ನು ಕೇಳಲು ಹಿಂಜರಿಯುತ್ತಾರೆ. ಆ ಸಂದರ್ಭದಲ್ಲಿ ಅವರು ತಮ್ಮ ಸಹಪಾಠಿಗಳನ್ನು ಅಥವಾ ಶಾಲೆಯಲ್ಲಿನ ಹಿರಿಯರನ್ನು ಯಾವುದೇ ಹಿಂಜರಿಕೆ ಇಲ್ಲದೆ ಕೇಳುತ್ತಾರೆ. ನಾವು ನಮ್ಮ ಕಾರ್ಯಕ್ರಮದಲ್ಲಿ ಹಿರಿಯ ವಿದ್ಯಾರ್ಥಿಗಳು ಕೆಳಗಿನ ತರಗತಿಗಳಿಗೆ ಕಲಿಸುವುದಕ್ಕೆ ಪ್ರೋತ್ಸಾಹ ನೀಡುತ್ತೇವೆ. ಇದು ಇಬ್ಬರಿಗೂ ಒಳ್ಳೆಯದನ್ನು ಉಂಟುಮಾಡುವಂಥದ್ದು. ಕಿರಿಯ ಮಕ್ಕಳು ಈ ತರಗತಿಗಳನ್ನು ಇಷ್ಟಪಡುತ್ತಾರೆ, ಏಕೆಂದರೆ ಅವರಿಗೆ ತಮ್ಮ ಹಿರಿಯ ಗೆಳೆಯರೊಂದಿಗೆ ಕೌಶಲ್ಯಗಳನ್ನು ಕಲಿಯುವುದು ಹಿತವೆನಿಸುತ್ತದೆ ಮತ್ತು ಅದೇ ಸಮಯದಲ್ಲಿ ಹಿರಿಯ ವಿದ್ಯಾರ್ಥಿಗಳು ಸ್ವತಂತ್ರವಾಗಿ ಕೆಲಸ ಮಾಡುವುದನ್ನು ಕಲಿಯುತ್ತಾರೆ ಮತ್ತು ತಮ್ಮ ಕಿರಿಯ ಶಾಲಾ ಸಹಪಾಠಿಗಳ ಕಲಿಕೆಯು ತಮ್ಮ ಜವಾಬ್ದಾರಿ ಎಂದು ಭಾವಿಸುತ್ತಾರೆ.

ಅಂಬಾಲದಲ್ಲಿ ಇರುವ ಶಾಲೆಯೊಂದರಲ್ಲಿ 8ನೇ ತರಗತಿ ಓದುತ್ತಿರುವ ಸುಮಿತ್ ಮತ್ತು ರಾಹುಲ್ ಎಂಬ ಇಬ್ಬರು ವಿದ್ಯಾರ್ಥಿಗಳು ತಮ್ಮ ದೈಹಿಕ ಶಿಕ್ಷಣದ ಅಧ್ಯಾಪಕರು ಬೇರೆ ಕೆಲಸದಲ್ಲಿದ್ದಾಗ ಅಥವಾ ಗೈರುಹಾಜರಾಗಿದ್ದಾಗ ಕೆಳಗಿನ ತರಗತಿಗಳನ್ನು ನಿರ್ವಹಿಸುತ್ತಾರೆ. ಹೀಗೆ ಕಲಿಸುವಾಗ ಸುಮಿತ್ ಮತ್ತು ರಾಹುಲ್ ಇಬ್ಬರೂ ಸಹ ಸವಾಲಿನ ಪರಿಸ್ಥಿತಿಗಳನ್ನು ಎದುರಿಸಿದ್ದಾರೆ. ಉದಾಹರಣೆಗೆ ವಿಭಿನ್ನ ಸಾಮರ್ಥ್ಯವುಳ್ಳ ಆರನೇ ತರಗತಿಯ ಒಬ್ಬ ಹುಡುಗಿ ಏನೇ ಆದರೂ ಆಟಗಳಲ್ಲಿ ಭಾಗವಹಿಸುತ್ತಿರಲಿಲ್ಲ. ಆಕೆ ಸುಮ್ಮನೆ ಕುಳಿತುಕೊಂಡು ತನ್ನ ಸಹಪಾಠಿಗಳು ಖುಷಿಪಡುವುದನ್ನು ನೋಡುತ್ತಿರುವುದನ್ನು ಒಂದು ವಾರ ಗಮನಿಸಿದ ಅನಂತರ ಸುಮಿತ್ ಮತ್ತು ರಾಹುಲ್ ಆಕೆಯನ್ನು ಆಟದಲ್ಲಿ ತೊಡಗಿಸಿಕೊಳ್ಳಲು ನಿರ್ಧರಿಸಿದರು. ಆರಂಭದಲ್ಲಿ ಆಕೆಯ ತರಗತಿಯ ವಿದ್ಯಾರ್ಥಿಗಳು ತಮ್ಮ ತಂಡಗಳಲ್ಲಿ ಆಕೆಯನ್ನು ಆಯ್ಕೆ ಮಾಡಿಕೊಳ್ಳುತ್ತಿರಲಿಲ್ಲ. ಸುಮಿತ್

ಮತ್ತು ರಾಹುಲ್ ತಾವೂ ಆಟದಲ್ಲಿ ಸೇರಿಕೊಂಡು ತಮ್ಮ ತಂಡ ಒಂದರಲ್ಲಿ ಆಕೆಯನ್ನೇ ಪ್ರಥಮ ಆಯ್ಕೆಯಾಗಿ ತೆಗೆದುಕೊಳ್ಳುತ್ತಿದ್ದರು. ನಿಧಾನವಾಗಿ ಆದರೆ ದೃಢವಾಗಿ ಇಡೀ ತರಗತಿಯು ಆ ಹುಡುಗಿಯ ಆಡುವ ಹಕ್ಕನ್ನು ಒಪ್ಪಿಕೊಂಡಿತು ಮತ್ತು ತಮ್ಮ ಆಟಗಳಲ್ಲಿ ಆಕೆಯನ್ನು ಧನಾತ್ಮಕ ಮಾರ್ಗಗಳ ಮೂಲಕ ತೊಡಗಿಸಿಕೊಳ್ಳುವುದನ್ನು ಕಂಡುಕೊಂಡಿತು.

ಸುಮಿತ್ ಮತ್ತು ರಾಹುಲ್ ಇಬ್ಬರೂ ಕೂಡ ತಾವು ಆಟದ ಮೈದಾನದಲ್ಲಿ ಎದುರಿಸಿದ ಒಂದು ಅನನ್ಯವಾದ ಸಮಸ್ಯೆಗೆ ಸ್ವತಂತ್ರವಾಗಿ ತಮ್ಮದೇ ಆದ ಪರಿಹಾರವನ್ನು ಕಂಡುಕೊಳ್ಳಬೇಕಾಯಿತು. ಆ ಹುಡುಗಿಯ ಭಾವನೆಗಳನ್ನು ಕುರಿತು ಅವರು ಅನುಭವಿಸಿದ ಸೂಕ್ಷ್ಮಭಾವನೆಗಳು ಮತ್ತು ಕ್ರೀಡೆಯ ಅವಿಭಾಜ್ಯ ಅಂಗವಾದ ಒಳಗೊಳ್ಳುವಿಕೆಯ ಪ್ರಜ್ಞೆ ಇವೆರಡನ್ನು ಆಧರಿಸಿ ಅವರು ನಿರ್ಣಯವನ್ನು ಮಾಡಬೇಕಾಯಿತು.

## ಒಂದು ತಂಡವಾಗಿ ಕೆಲಸ ಮಾಡುವುದರ ಮೂಲಕ ಜನತಾಂತ್ರಿಕ ಮೌಲ್ಯಗಳನ್ನು ಕಲಿಯುವುದು

ಪ್ರತಿಯೊಂದು ಕ್ರೀಡಾ ಅವಧಿಗೂ ನಾವು ಹುಡುಕಿಕೊಳ್ಳುವ ಆಟಗಳು ಒಂದು ಕೇಂದ್ರ ತತ್ತ್ವದ ಮೇಲೆ ಆಧರಿಸಿ ಇರುತ್ತವೆ: ಅದೇನೆಂದರೆ ಅವು, ಕೇವಲ ತಂಡಗಳ ನಡುವೆ ಜರುಗುವ ಆಟಗಳಾಗಿರಬೇಕು. ತಂಡ ಆಧಾರಿತ ಆಟಗಳನ್ನು ಆಡುವುದು ಕಲಿಕೆಗೆ ಒಂದು ಉತ್ತಮ ಚಲನಶೀಲ ಪರಿಸರವನ್ನು ಕಟ್ಟಿಕೊಡುತ್ತದೆ. ತಂಡಗಳ ಒಳಗೆ ನಡೆಯುವ ಮತ್ತು ಎದುರಾಳಿಗಳೊಂದಿಗೆ ನಡೆಯುವ ಅಂತರ್ ಕ್ರಿಯೆಗಳ ಮೂಲಕ ಮಕ್ಕಳು ನ್ಯಾಯ, ಗೌರವ ಮತ್ತು ಸಮಾನತೆಗಳನ್ನು ಕಲಿಯಲು ಅವಕಾಶಗಳುಂಟಾಗುತ್ತವೆ. ತಂಡ ಆಧಾರಿತ ಕ್ರೀಡೆಯಲ್ಲಿ ಮಗು ಕೇವಲ ತನ್ನಮಟ್ಟಿಗೆ ಅಲ್ಲದೆ ಒಂದು ವಿಶಾಲವಾದ ಚಿತ್ರದ ಬಗ್ಗೆ ಆಲೋಚಿಸುವ ಒತ್ತಾಯಕ್ಕೆ ಒಳಗಾಗುತ್ತದೆ. ಮಗುವಿಗೆ ಜನತಾಂತ್ರಿಕ ಕಾರ್ಯಶೈಲಿಯಲ್ಲಿ ಕೆಲಸ ಮಾಡುವುದು ಆವಶ್ಯಕವಾಗುತ್ತದೆ. ತಂಡ ಒಂದರ ಸದಸ್ಯರು ಒಬ್ಬರನ್ನೊಬ್ಬರು ಸಮಾನತೆ ಮತ್ತು ನ್ಯಾಯದೊಂದಿಗೆ ನಡೆಸಿಕೊಳ್ಳದಿದ್ದರೆ, ಒಬ್ಬರು ಮತ್ತೊಬ್ಬರ ಅಭಿಪ್ರಾಯಗಳನ್ನು ಗೌರವಿಸದಿದ್ದರೆ ಮತ್ತು ಒಬ್ಬರು ಇನ್ನೊಬ್ಬರಿಗೆ ವೈಯಕ್ತಿಕವಾಗಿ ಯೋಚಿಸಲು ಮತ್ತು ಕೆಲಸ ಮಾಡಲು ಸ್ವಾತಂತ್ರ್ಯ ನೀಡದಿದ್ದರೆ ಆಗ ಅವರು ಒಂದು ಒಕ್ಕೂಟರಂಗವನ್ನು ಮುಂದಿಡಲು ಸಾಧ್ಯವಾಗದೆ ಖಂಡಿತವಾಗಿಯೂ ಸೋಲುಣ್ಣುತ್ತಾರೆ.

ಇದಕ್ಕೆ ಫ್ರಿಸ್ಬಿ ಆಟವು ಒಂದು ಉದಾಹರಣೆ. ಇದು ಲಿಂಗ ತಾರತಮ್ಯ ರಹಿತವಾಗಿರುವುದರಿಂದ, ಸ್ವಯಂಸ್ಫೂರ್ತಿಯ ಆಟವಾಗಿರುವುದರಿಂದ ಮತ್ತು ಕ್ರೀಡಾ ಮನೋಭಾವದ ಮೇಲೆ ಕೇಂದ್ರಿತವಾಗಿರುವುದರಿಂದ ಇದೊಂದು ಅನನ್ಯವಾದ ಆಟವಾಗಿದೆ. ಫ್ರಿಸ್ಬಿ ತಂಡಗಳ ಸ್ಪರ್ಧೆಯೊಂದರೊಳಗೆ ನಾವು ಇಡೀ ಆಟವನ್ನು ಕೇವಲ ಕೆಲವೇ ಮಂದಿ (ಬಹುತೇಕವಾಗಿ ಹುಡುಗರು) ಆಡುತ್ತಿದ್ದು , ಉಳಿದ ಆಟಗಾರರು (ಬಹುತೇಕವಾಗಿ ಹುಡುಗಿಯರು) ಡಿಸ್ಕನ್ನು ಹಿಡಿಯುವ ಅವಕಾಶವನ್ನು ಪಡೆಯದೆ ಸುಮ್ಮನೆ ಇದ್ದಂತಹ ಸವಾಲಿನ ಸಂದರ್ಭವನ್ನು ಎದುರಿಸಿದವು. ನಮ್ಮ ತರಬೇತುದಾರರು ಹುಡುಗರು, ಹುಡುಗಿಯರನ್ನು ಆಟದಲ್ಲಿ ಒಂದಾಗಿಸಿಕೊಳ್ಳಬೇಕೆಂದು ಪ್ರೋತ್ಸಾಹಿಸಿದರೂ ಕೂಡ, ಅದು ಕಡೆಗೂ ಕೆಲಸ ಮಾಡಲಿಲ್ಲ. ತಂಡದ ಸದಸ್ಯರು ಒಬ್ಬರು ಇನ್ನೊಬ್ಬರನ್ನು ನಂಬುವುದು ಸಾಧ್ಯವೇ ಆಗಲಿಲ್ಲ.

ತಂಡವು ಆಟವನ್ನು ಚೆನ್ನಾಗಿ ಕಲಿತು ಉತ್ತಮವಾಗಿ ಆಡಲಾರಂಭಿಸಿದ ಮೇಲೆ ಕ್ರೀಡಾಪಟುಗಳು, ತಂಡದಲ್ಲಿನ ಪ್ರತಿಯೊಬ್ಬ ಆಟಗಾರರಿಗೂ ಡಿಸ್ಕನ್ನು ಹಸ್ತಾಂತರ ಮಾಡುವುದರ ಪ್ರಾಮುಖ್ಯವನ್ನು ಕಲಿತುಕೊಂಡರು. ಯಾವಾಗ ಡಿಸ್ಕ್ ಕೇವಲ ಹುಡುಗರೊಂದಿಗೆ ಉಳಿಯಿತೋ ಆಗ ಎದುರಾಳಿ ತಂಡಗಳಿಗೆ ಕೇವಲ ಹುಡುಗರಿಂದ ರಕ್ಷಿಸಿಕೊಂಡು ಆಟವನ್ನು ಗೆಲ್ಲುವುದು ಸಾಧ್ಯವಾಯಿತು. ಹುಡುಗರು ಆಟದಲ್ಲಿನ ಅಂಕಗಳನ್ನು ಗೆಲ್ಲುವ ಒತ್ತಡವನ್ನು ತಮ್ಮ ಮೇಲೆ ಹಾಕಿಕೊಂಡಿದ್ದರಿಂದ ಅವರಿಗೆ ಉಂಟಾದ ಆತಂಕದಿಂದ ಡಿಸ್ಕನ್ನು ಕಳೆದುಕೊಳ್ಳಲಾರಂಭಿಸಿದರು. ಆಟದ ಅವಧಿಯ ಅನೇಕ ಸರಣಿಗಳ ಅನಂತರ ಹುಡುಗರು ತಾವು ಡಿಸ್ಕನ್ನು ಎಸೆದಾಗ, ಅದನ್ನು ಹುಡುಗಿಯರು ಹಿಡಿದುಕೊಂಡು ಬೇರೆಯವರಿಗೆ ಹಸ್ತಾಂತರ ಮಾಡುತ್ತಾರೆ ಎಂಬ ವಿಶ್ವಾಸವನ್ನು ಅಂತಿಮವಾಗಿ ಬೆಳೆಸಿಕೊಂಡರು. ಈ ಬೆಳವಣಿಗೆಯ ಅನಂತರ ಹುಡುಗಿಯರು ಹೆಚ್ಚು ಉತ್ಸಾಹದಿಂದ ಆಡತೊಡಗಿದರು. ಅವರಿಗೇ ತಮ್ಮ ಆಟವು ಅಚ್ಚರಿಯನ್ನುಂಟು ಮಾಡಿತು ಮತ್ತು ಹುಡುಗಿಯರು ಎಷ್ಟು ಚೆನ್ನಾಗಿ ಆಡುತ್ತಾರೆ ಎಂದು ಹುಡುಗರು ಸಹ ಚಕಿತರಾದರು.

ಒಂದು ಶಾಲಾ ಮಟ್ಟದ ಫ್ರಿಸ್ಬಿ ಆಟವು ಹುಡುಗರಿಗೆ, ತಾವು ಹುಡುಗಿಯರನ್ನು ಕುರಿತು ಅಗೌರವದಿಂದ ನಡೆದುಕೊಂಡೆವು, ಅನ್ಯಾಯಯುತವಾಗಿ ವರ್ತಿಸಿದೆವು ಮತ್ತು ತಂಡಕ್ಕಾಗಿ ಚೆನ್ನಾಗಿ ಕೆಲಸ ಮಾಡುವ ಆಟಗಾರ್ತಿಯರ ಹಕ್ಕನ್ನು ಹತ್ತಿಕ್ಕಿದೆವು ಎಂಬುದನ್ನು ಅರ್ಥ ಮಾಡಿಸಿತು. ಗೆಲ್ಲಬೇಕೆಂಬ ಆಕಾಂಕ್ಷೆ ಅವರು ತಮ್ಮ ವರ್ತನೆಯನ್ನು ಕುರಿತು ಮರು ಚಿಂತನೆ ನಡೆಸಲು ಮತ್ತು ಹುಡುಗಿಯರು ತಮ್ಮ ಸಮಾನರು ಎಂಬಂತೆ ನೋಡಿಕೊಳ್ಳಲು ಒತ್ತಾಯ ಹಾಕಿತು. ಆಟದಲ್ಲಿ ಮೊದಲ ಬಾರಿಗೆ ಹುಡುಗಿ ಒಬ್ಬಳಿಗೆ ಡಿಸ್ಕನ್ನು ಹಸ್ತಾಂತರ ಮಾಡಿದ ಕ್ಷಣದಿಂದಲೂ ಅವರು ಈ ಜನತಾಂತ್ರಿಕ ಮೌಲ್ಯಗಳನ್ನು ಆಚರಣೆಗೆ ತರುವ ಬದ್ಧತೆಯನ್ನು ಪ್ರದರ್ಶಿಸಿದರು.

ಮೈದಾನದಲ್ಲಿ ಆದಂತಹ ಇಂತಹ ಅನೇಕ ಅನುಭವಗಳಿಂದ ನಾವು ಒಂದು ಚೆನ್ನಾಗಿ ರಚಿಸಲ್ಪಟ್ಟ ದೈಹಿಕ ಶಿಕ್ಷಣದ ಪಠ್ಯಕ್ರಮವನ್ನು ಕ್ರಿಯಾಶೀಲವಾಗಿ ಅನುಸರಿಸಿದಲ್ಲಿ, ಅದು ನಮ್ಮ ಸರ್ಕಾರಿ ಶಾಲೆಗಳಲ್ಲಿ ಶಿಕ್ಷಣದ ಧ್ಯೇಯಗಳನ್ನು ಸಾಧಿಸುವುದಕ್ಕೆ ನೆರವಾಗುವಲ್ಲಿ ಒಂದು ಮುಖ್ಯ ಪಾತ್ರವನ್ನು ವಹಿಸುತ್ತದೆ ಎಂದು ದೃಢವಾಗಿ ನಂಬಿದ್ದೇವೆ.

ಅಂತಿಮವಾಗಿ ಹೇಳಬೇಕೆಂದರೆ ಮೈದಾನದಲ್ಲಿನ ನಮ್ಮ ಅನುಭವಗಳು ಶಿಕ್ಷಣದ ಧ್ಯೇಯಗಳಿಗೆ ದೈಹಿಕ ಶಿಕ್ಷಣವು ಒಂದು ಅನನ್ಯ ಕೊಡುಗೆದಾರ ಎಂಬ ಪುರಾವೆಯನ್ನು ಒದಗಿಸುತ್ತವೆ ಆದರೂ ನಾವು ಸಾಂಸ್ಕೃತಿಕ ಸಂದರ್ಭ ಮತ್ತು ಪಠ್ಯಕ್ರಮವನ್ನು ರೂಪಿಸುವಲ್ಲಿ ಅದರ ಪಾತ್ರದ ಬಗ್ಗೆಯೂ ಚಿಂತಿಸಬೇಕಾದ ಆವಶ್ಯಕತೆ ಇದೆ. ಕಲೆಗಳಂತೆಯೇ ಕ್ರೀಡೆಗಳು ಮತ್ತು ದೈಹಿಕ ಶಿಕ್ಷಣವು ತಾನು ಯಾವ ಸಮುದಾಯದ ಸೇವೆಗೈಯುತ್ತದೋ ಅದರಲ್ಲಿ ಬೇರುಗಳನ್ನು ಹೊಂದಿದ್ದಾಗ ಅದು ಜೀವಂತವಾಗುತ್ತದೆ. ದೀರ್ಘಕಾಲ ಉಳಿಯುವಂತಹ ಸಾಮಾಜಿಕ ಮೌಲ್ಯಗಳನ್ನು ಕಲಿಯಲಿಕ್ಕಾಗಿ ಸ್ಥಳೀಯ ಸಮುದಾಯಗಳನ್ನು ತೊಡಗಿಸಿಕೊಳ್ಳುವುದು ಮತ್ತು ಹೆಚ್ಚು ಹೆಚ್ಚು ಸ್ಥಳೀಯ ಆಟಗಳನ್ನು ಆಡುವುದು ಇವು ಶಾಲಾ ಪಠ್ಯಕ್ರಮದಲ್ಲಿ ದೈಹಿಕ ಶಿಕ್ಷಣವನ್ನು ಸ್ಥಾಪಿಸಲು ಕೀಲಿ ಕೈಯಾಗಬಹುದು.

ಅದಿತಿ ಮುತಾತ್ಕರ್ ಅವರು ಒಬ್ಬ ಖ್ಯಾತ ಮಾಜಿ ಅಂತರರಾಷ್ಟ್ರೀಯ ಬ್ಯಾಡ್ಮಿಂಟನ್ ಆಟಗಾರ್ತಿಯಾಗಿದ್ದು 2010ರಲ್ಲಿ ಭಾರತದ ಪರವಾಗಿ ಕಾಮನ್ವೆಲ್ತ್ ಕ್ರೀಡಾಕೂಟದಲ್ಲಿ ಬೆಳ್ಳಿಯ ಪದಕವನ್ನು ಸಂಪಾದಿಸಿಕೊಂಡಿದ್ದಾರೆ. ಅವರು ಡಲ್ಲಾಸ್ನಲ್ಲಿರುವ ಟೆಕ್ಸಾಸ್ ವಿಶ್ವವಿದ್ಯಾಲಯದಿಂದ ಸಾರ್ವಜನಿಕ ವ್ಯವಹಾರಗಳಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದುಕೊಂಡಿದ್ದಾರೆ. ಅವರು ಆರ್ಟ್ ಆಫ್ ಪ್ಲೇ ಫೌಂಡೇಶನ್ ಪಠ್ಯಕ್ರಮ ವಿನ್ಯಾಸ ತಂಡದ ಭಾಗವಾಗಿದ್ದು, ಈ ಸಂಘಟನೆಯು ಸರ್ಕಾರಿ ಶಾಲೆಗಳಲ್ಲಿ ದೈಹಿಕ ಶಿಕ್ಷಣದ ಗುಣಮಟ್ಟವನ್ನು ಅಭಿವೃದ್ಧಿಪಡಿಸುವುದಕ್ಕೆ ಬದ್ಧವಾಗಿದೆ. ಅವರನ್ನು ಸಂಪರ್ಕಿಸಬಹುದು aditi@artofplay.co.in

ಆಕಾಶ್ ರವರು ಗಾಂಧಿ ಫೆಲೋ ಆಗಿದ್ದು ಸೂರತ್ನ ಸರಕಾರಿ ಶಾಲೆಗಳಲ್ಲಿ ಕ್ರೀಡಾ ಶಿಕ್ಷಣವನ್ನು ಜಾರಿಗೊಳಿಸುವುದರಲ್ಲಿ ಮುಖ್ಯ ಪಾತ್ರವನ್ನು ವಹಿಸಿದರು. ಅವರು ಫರೀದಾಬಾದ್ ನಲ್ಲಿನ 30 ಶಾಲೆಗಳಲ್ಲಿ ಆರ್ಟ್ ಆಫ್ ಪ್ಲೇ ಫೌಂಡೇಶನ್ನ ಪರವಾಗಿ ಶಿಕ್ಷಕ ತರಬೇತಿ ಕಾರ್ಯಕ್ರಮದ ಚಟುವಟಿಕೆಗಳಲ್ಲಿ ನೇತಾರ ಪಾತ್ರ ವಹಿಸುತ್ತಿದ್ದಾರೆ. ಅವರು ಒಂದಲ್ಲ ಒಂದು ದಿನ ಸೌಲಭ್ಯ ವಂಚಿತರಿಗಾಗಿ ಫುಟ್ಬಾಲ್ ಶಾಲೆಯನ್ನು ತೆರೆಯಬೇಕೆಂಬ ಕನಸನ್ನು ಹೊಂದಿದ್ದಾರೆ. ಅವರನ್ನು ಸಂಪರ್ಕಿಸಬಹುದು akash@artofplay.co.in